ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತಮೂರನೆಯ ಅಧಿವೇಶನ

ಗುರುವಾರ, ದಿನಾಂಕ: 4ನೇ ಫೆಬ್ರುವರಿ, 2021

ನೀರಾವರಿ ಯೋಜನೆಗಳಿಗೆ ಒದಗಿಸಿದ ಅನುದಾನ

ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು):-

393(409) ಮಾನ್ಯ ಜಲಸಂಪನ್ಮೂಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಳೆದ ಮೂರು ವರ್ಷಗಳಿಂದ ನೀರಾವರಿ ಯೋಜನೆಗಳಿಗೆ ಬಜೆಟ್‌ನಲ್ಲಿ ನಿಗದಿಪಡಿಸಿದ, ಬಿಡುಗಡೆ ಮಾಡಿದ ಮತ್ತು ವೆಚ್ಚ ಮಾಡಿರುವ ಹಣ ಎಷ್ಟು; (ಯೋಜನೆವಾರು ಮತ್ತು ವರ್ಷವಾರು ವಿವರ ನೀಡುವುದು)

(ಆ) ಕಳೆದ ಮೂರು ವರ್ಷಗಳಿಂದ ಮಂಜೂರು ಮಾಡಿದ ಹೊಸ ನೀರಾವರಿ ಯೋಜನೆಗಳು ಯಾವುವು; ಈ ಹೊಸ ಯೋಜನೆಗಳಿಗೆ ಮಂಜೂರು ಮಾಡಿರುವ ಮತ್ತು ಬಿಡುಗಡೆ ಮಾಡಿರುವ ಹಣ ಎಷ್ಟು; (ವಿವರ ನೀಡುವುದು)

(ಇ) ರಾಜ್ಯದಲ್ಲಿ ಹೊಸದಾಗಿ ಘೋಷಣೆ ಮಾಡಿರುವ ನೀರಾವರಿ ಯೋಜನೆಗಳು ಯಾವುವು; ಈ ಹೊಸ ಯೋಜನೆಗಳಿಗೆ ಮಂಜೂರು ಮಾಡಿರುವ ಮತ್ತು ಬಿಡುಗಡೆ ಮಾಡಿರುವ ಹಣ ಎಷ್ಟು; (ವಿವರ ನೀಡುವುದು)

(ಈ) ಸದರಿ ಯೋಜನೆಗಳು ಪೂರ್ಣಗೊಳ್ಳಲು ಎಷ್ಟು ಸಮಯವನ್ನು ನಿಗದಿ ಮಾಡಲಾಗಿದೆ ಹಾಗೂ ಈ ಯೋಜನೆಗಳು ಪೂರ್ಣಗೊಳ್ಳಲು ಅಗತ್ಯವಿರುವ ಹಣ ಎಷ್ಟು; (ವಿವರಗಳನ್ನು ನೀಡುವುದು)

(ಉ) ಕಳೆದ 3 ವರ್ಷಗಳಲ್ಲಿ ರಾಜ್ಯದಲ್ಲಿನ ನೀರಾವರಿ ಯೋಜನೆಗಳ ಅನುಷ್ಠಾನಕ್ಕೆ ಸರ್ಕಾರದ ಖಾತರಿಯೊಂದಿಗೆ ವಿವಿಧ ವಾಣಿಜ್ಯ ಬ್ಯಾಂಕ್‌ಗಳಿಂದ ಎತ್ತಿರುವ ಸಾಲವೆಷ್ಟು ಮತ್ತು ಈ ಸಾಲದಲ್ಲಿ ಹೆಚ್ಚುವರಿ ಆರ್ಥಿಕ ಹೊರೆ (Extra Financial Implication)ಯ ಬಿಲ್ಲುಗಳನ್ನು ತೀರುವಳಿ ಮಾಡಲು ಉಪಯೋಗಿಸಿರುವ ಹಣವೆಷ್ಟು? (ನಿಗಮವಾರು ಸಂಪೂರ್ಣ ಮಾಹಿತಿ ಒದಗಿಸುವುದು)